# ನಾವು ಗುರುತಿಸಲು ಬಯಸದ ಅಂಗೈಹುಣ್ಣು

ವಿಮಲಾ ರಾಮಚಂದ್ರನ್ ಅನು: ಜನಾರ್ದನ.ಸಿ.ಎಸ್

ಹಲವು ದಶಕಗಳಿಂದಲೂ ಸೇವೆಯಲ್ಲಿರುವ ಶಿಕ್ಷಕರ ತರಬೇತಿ ಕಾರ್ಯಕ್ರಮಗಳು, 'ಕ್ಲಿಷ್ಟಕರ 'ವಿಷಯಗಳೆಂದು ಸಮ್ಮೋಕ್ತಿಯಿಂದ ಕರೆಯುವ, ಪಠ್ಯ ವಿಷಯಗಳ ಜ್ಞಾನಕ್ಕೇ ಒತ್ತು ನೀಡಿವೆ. ಸೇವಾ ನಿರತ ಶಿಕ್ಷಕ ತರಬೇತಿಯನ್ನು ಗಟ್ಟಿಗೊಳಿಸುವ ಯೋಜನೆಯ ಅನುಷ್ಠಾನ ಪ್ರಬಲವಾಗಿದ್ದ ಡಿಪಿಇಪಿ ದಿನಗಳಷ್ಟು (1994ರಿಂದೀಚೆಗೆ) ಹಿಂದಿನಿಂದಲೂ ಈ ಪದ್ಧತಿಯೇ ಇದೆ. ಇದಕ್ಕಾಗಿ ರಾಜ್ಯ ಯೋಜನಾ ಕಛೇರಿಗಳು ಶಿಕ್ಷಕ ತರಬೇತಿಯ ವಿನ್ಯಾಸಕ್ಕಾಗಿ ಹಲವಾರು ಪರಿಣತರನ್ನು ನೇಮಿಸಿಕೊಂಡರು. ಡಿಪಿಇಪಿ ದಿನಗಳಿಂದಲೂ ಶಿಕ್ಷಕರಿಗೆ ಬೇಕಾದುದೇನು, ಅವರ ಆಶಯವೇನು ಮತ್ತದನ್ನು ಒದಗಿಸುವ ಉತ್ತಮ ಮಾರ್ಗವೇನು ಎಂಬೆಲ್ಲ ವಿಷಯಗಳನ್ನರಿಯಲು ಯಾರೂ ಪ್ರಯತ್ನಿಸಲೇ ಇಲ್ಲ ಎಂಬುದೊಂದು ಅಚ್ಚರಿಯೇ ಸರಿ.

1998ರಷ್ಟು ಹಿಂದೆಯೇ ನನಗೆ ಶಿಕ್ಷಕರ ಲಿಂಗ ಸಮಾನತೆಯ ಅರಿವಿನ ಗ್ಗೆ ಒಂದು ತರಬೇತಿ ಕಾರ್ಯಕ್ರಮದ ವಿನ್ಯಾಸದ ಕೆಲಸವನ್ನು  ವಹಿಸಿದರು. ಡಿಪಿಇಪಿ ಕಾರ್ಯಕ್ರಮಕ್ಕೆ ನೆರವು ನೀಡಿದ ದಾನಿಗಳು (ಎಲ್ಲ ಲಿಂಗಿಗಳನ್ನೂ ಮುಖ್ಯವಾಹಿನಿಗೆ ತರುವ ಕೆಲಸವನ್ನು ಉತ್ತೇಜಿಸುತ್ತಿದ್ದರು),  ಲಿಂಗ ಸಮಾನಬತೆಯ ಬಗ್ಗೆ ನಡೆಸುತ್ತಿದ್ದ ಒಟ್ಟು ಕಾರ್ಯಕ್ರಮದ ಒಂದು ಭಾಗವಾಗಿತ್ತದು. ಈ ಕೆಲಸವನ್ನು ಮಾಡಲು ನಾನು ಕೆಲವು ರಾಜ್ಯಗಳಲ್ಲಿ (ರಾಜಸ್ತಾನ, ಮಧ್ಯ ಪ್ರದೇಶ ಮತ್ತು ಆಂಧ್ರ ಪ್ರದೇಶ) ಪ್ರಾಥಮಿಕ ಶಾಲೆಯ ಶಿಕ್ಷಕರ ಗುಂಪುಗಳೊಡನೆ ಸಂವಾದ ನಡೆಸಲು ನಿಶ್ಚಯಿಸಿದೆ. ನಾನು ನೋಡಿದ್ದು, ಕೇಳಿದ್ದು, ಹೊರಗಿನವಳಾದ ನನಗೆ ಯಾವ ಮಟ್ಟದಲ್ಲಿ ಹೊಸ ದೃಷ್ಟಿ ನೀಡಿತೋ ಹಾಗೆಯೇ ಯಾರೂ ಗುರುತಿಸಲು ಇಚ್ಛಿಸದ  ಅಂಗೈ ಹುಣ್ಣೆಂದೂ ಅರಿವಾಯಿತು. ಶಿಕ್ಷಕ ತರಬೇತುದಾರರು, ಅಧಿಕಾರಿಗಳು ಮತ್ತು ಪರಿಣತರಿಗೆ ವಸ್ತು ಸ್ಥಿತಿಯು ಗೊತ್ತಿದ್ದರೂ ಸಹ ತರಬೇತಿಯ ವಿನ್ಯಾಸದಲ್ಲಾಗಲೀ ತರಬೇತಿಯ ವಿಷಯಗಳಲ್ಲಾಗಲೀ ಅವನ್ನು ಪರಿಗಣಿಸಿರಲಿಲ್ಲ. ಇದೇ ವಿಷಯದ ಬಗೆಗಿನ ಒಂದು ಪರಿಣತ ಸಮಿತಿಯ ಸದಸ್ಯೆಯಾಗಿ 2016ರಲ್ಲಿ ಗಮನಿಸಿದಾಗಲೂ, ಯಾವ ಬದಲಾವಣೆಯೂ ಆಗದಿರುವುದು ಮಾತ್ರವಲ್ಲದೆ ನಾವು ಸಮಸ್ಯೆಯ ಕಡೆ ಕಣ್ಣನ್ನೂ ಹಾಯಿಸದಿರುವುದು ಸಖೇದಾಶ್ಚರ್ಯವಾಗಿ ಕಂಡುಬಂದಿತು.

ಫಲಪ್ರದವಾದ ಕಲಿಸುವಿಕೆ ಮತ್ತು ಕಲಿಕೆಗೆ ಇರುವ ಅಡೆ ತಡೆಗಳೇನು ಎಂದೊಂದು ಶಿಕ್ಷಕರ ಗುಂಪನ್ನು ನಾನು 1998ರಲ್ಲಿ ಕೇಳಿದೆ. ಸಣ್ಣ ಸಣ್ಣ ಗುಂಪುಗಳಾಗಿ ಕುಳಿತು ಅಡೆತಡೆಗಳ ಪಟ್ಟಿಮಾಡಲು ನಿರ್ಧರಿಸಲಾಯಿತು.  ನಾವು ಮಾತನಾಡಿದ್ದು ಈ ಕೆಳಗಿನಂತಿದೆ:

ಅವರಿಗೆ ಮಕ್ಕಳ ಮೇಲೆ ಇದ್ದ ಭರವಸೆಯೇ ಕೆಲಸ ಮಾಡಲು ಪ್ರೇರೇಪಿಸುತ್ತದೆಯೆಂದು ನಿವೃತ್ತಿಯ ಅಂಚಿನಲ್ಲಿದ್ದ ಶಿಕ್ಷಕರೊಬ್ಬರು ತಿಳಿಸಿದರು. ಆ ಶಿಕ್ಷಕರು ಬದ್ಧತೆಯುಳ್ಳ ಉತ್ತಮ ಗಣಿತ ಶಿಕ್ಷಕರೆಂದು ಹೆಸರಾಗಿದ್ದರು. ಅವರನ್ನು ಸಂಪನ್ಮೂಲ ವ್ಯಕ್ತಿಯನ್ನಾಗಿ ಡಿಪಿಇಪಿ ಆರಿಸಿಕೊಂಡಿತ್ತು.   ಈ ಮಕ್ಕಳು ಕಲಿಯಲಾರವು, ಅಥವಾ   ಹೆಣ್ಣು ಮಕ್ಕಳಿಗೆ ಗಣಿತ ಅರ್ಥವಾಗುವುದಿಲ್ಲ, ಅಥವಾ ಇನ್ನೂ ಅಧ್ವಾನವೆಂದರೆ, ಆ ಒಂದು ಜಾತಿಯ ಮಕ್ಕಳು ದಡ್ಡರು। ಎಂಬಿತ್ಯಾದಿ ನಂಬಿಕೆಗಳನ್ನು ಅವರಿಗೆ ತಿಳಿದ ಬಹಳಷ್ಟು ಶಿಕ್ಷಕರು ಹೊಂದಿದ್ದಾರೆ ಎಂದು ಅವರು ಅಭಿಪ್ರಾಯ ವ್ಯಕ್ತಪಡಿಸಿದರು. ತಮ್ಮ ಮಿತಿಗಳು, ದೃಷ್ಟಿಕೋನಗಳು ಮತ್ತು ಪೂರ್ವಗ್ರಹಗಳನ್ನೇ ಶಿಕ್ಷಕರು ಮೊದಲಿಗೆ ಮೀರಬೇಕಿದೆ ಎಂದು ಅವರು ವಿವರಿಸಿದರು.  ಆದಾಗ್ಯೂ ಸೇವಾನಿರತ ಶಿಕ್ಷಕರ ತರಬೇತಿ ಕಾರ್ಯಕ್ರಮಗಳಲ್ಲಿ ಆಳದಲ್ಲಿ ಹುದುಗಿದ ಮೌಲ್ಯ ಮತ್ತು ಪೂರ್ವಗ್ರಹಗಳ ಬಗ್ಗೆ ಮಾತನಾಡುವುದು ಅತಿ ವಿರಳ. ಮಕ್ಕಳ ಲಿಂಗ, ಆರ್ಥಿಕ ಸ್ಥಿತಿ, ಪೋಷಕರ

ವೃತ್ತಿ, ಜಾತಿ ಅಥವಾ ಪಂಗಡಗಳ ಹೊರತಾಗಿಯೂ ಮಕ್ಕಳು ಕಲಿಯಬಲ್ಲರೆಂಬ ನಂಬಿಕೆಯನ್ನು ನಮ್ಮ ಶಿಕ್ಷಕರಲ್ಲಿ ಮೂಡಿಸುವುದೇ ಮೊದಲ ಕೆಲಸವೆಂದು ಆ ಹಿರಿಯರು ವಿವರಿಸಿದರು.

ಮೌಲ್ಯಗಳು ಹಾಗೂ ನಂಬಿಕೆಗಳ ಬಗ್ಗೆ ಮಾತನಾಡುತ್ತಾ ಕೆಲವು ಸದಸ್ಯರು, ಪಠ್ಯ ಪುಸ್ತಕಗಳು ಮತ್ತು ಪಠ್ಯ ಸಾಮಗ್ರಿಗಳು ಸಿದ್ಧಮಾದರಿಗಳನ್ನು ಮತ್ತು ಪೂರ್ವಗ್ರಹಗಳನ್ನು ಬಲಪಡಿಸುತ್ತವೆ ಎಂದೂ ಅಭಿಪ್ರಾಯ ಪಟ್ಟರು. ಯಾವುದು ಗಂಡುತನ ಮತ್ತು ಹೆಣ್ಣುತನ ಇಲ್ಲವೇ ಯಾವುದು ಜಾತಿ ಸಂಬಂಧಿ, ಕೆಲಸಗಳು ಮುಂತಾದುವು ಚಿತ್ರಗಳು, ನುಡಿಗಟ್ಟುಗಳು ಮತ್ತು ಉದಾಹರಣೆಗಳ ಮೂಲಕ ಎದ್ದು ಕಾಣುತ್ತವೆ. ಗ್ರಾಮೀಣ ಮತ್ತು ಪಟ್ಟಣದ ಪ್ರತಿಮೆಗಳನ್ನೂ ಇವು ನೀಡುತ್ತವೆ ಅಷ್ಟೇ ಅಲ್ಲ, ಪಟ್ಟಣದವು ಗ್ರಾಮೀಣಕ್ಕಿಂತ ಪ್ರಾಶಸ್ತ್ಯ ಪಡೆಯುತ್ತವೆ, ಬುಡಕಟ್ಟುಗಳಿಗಿಂತ ಉಳಿದವು ಪ್ರಾಶಸ್ತ್ಯ ಪಡೆಯುತ್ತವೆ. ನಗರ ಕೇಂದ್ರಿತವಾದ ಬಹಳ ಜನರ ಮತ್ತು ಸನ್ನಿವೇಶಗಳ ಉದಾಹರಣೆಗಳನ್ನು ಶಿಕ್ಷಕರು ಎಲ್ಲ ವಿಷಯಗಳಿಂದಲೂ ಉದಹರಿಸಿದರು.

> "ನನ್ನ ಪಠ್ಯಗಳಲ್ಲಿ ಕೇವಲ ಗಂಡಸರು ಮಾತ್ರ ರಾಜರೂ, ಸೈನಿಕರೂ ಆಗಬೇಕೆಂದು ಕಲಿತಿದ್ದೆ, ಪ್ರಸಿದ್ಧರಾದ ಮತ್ತು ವೈರಿಗಳೊಡನೆ ಹೋರಾಡಿದ ರಾಣಿಯರ ಬಗ್ಗೆ ಓದುವವರೆಗೂ ಇದನ್ನೇ ನಂಬಿದ್ದೆ. ಕೇವಲ ಗಂಡಸರೇ ವೈದ್ಯರು ಎಂದು ಓದಿದ್ದೆ, ನಾನು ವೈದ್ಯರನ್ನು ಕಾಣಲು ಹೋದಾಗ ಅಲ್ಲಿನ ವೈದ್ಯೆ ಹೆಂಗಸಾಗಿದ್ದರು. ನನ್ನ ಪಠ್ಯದಲ್ಲಿ ಕೇವಲ ಗಂಡಸರಷ್ಟೇ ರೈತರ ಕೆಲಸ ಮಾಡುತ್ತಾರೆಂದು ತಿಳಿದಿದ್ದೆ, ರೈಲಿನ ಒಂದು ಪ್ರಯಾಣದಲ್ಲಿ, ಹೊಲ-ಗದ್ದೆಗಳಲ್ಲಿ ಕೆಲಸ ಮಾಡುತ್ತಿದ್ದ ಹೆಂಗಸರನ್ನು ನೋಡುವವರೆಗೂ. ನಾನೀಗ ನೋಡಿ ಕಲಿಯುವುದು ಬಹಳ ಇದೆ ಎಂದು ಕಲಿತಿದ್ದೇನೆ."
> (ಪೂಜಾ, ರಮ್ಯಾ, ಅನುಜ್, ಉತ್ಕರ್ಷ್ 7ನೇ ತರಗತಿ ವಿದ್ಯಾರ್ಥಿಗಳು, ಬರೋಡ, ರಾಷ್ಟ್ರೀಯ ಪಠ್ಯ ಕ್ರಮ 2005ರ ಲಿಂಗ ಸಮಸ್ಯೆಗಳ ಬಗೆಗಿನ ತಂಡ. NCERT.2005 ರಲ್ಲಿ ಉದಹರಿಸಿದೆ)

ನಾಯಕರು ಮತ್ತು ಸಾಹಸಿಗಳು ಗಂಡಸರೂ ಹಾಗೂ ಮನೆವಾರ್ತೆ ನೋಡಿಕೊಳ್ಳುವವರು ಮತ್ತು ಪಾಲನೆಯಲ್ಲಿ ತೊಡಗುವವರು ಸಾಮಾನ್ಯವಾಗಿ ಹೆಂಗಸರೇ ಆಗಿರುತ್ತಾರೆ. ತರಬೇತಿ ಕಾರ್ಯಕ್ರಮಗಳಲ್ಲಿ ಗಮನ ಕೇವಲ ಭಾಷೆಯೋ, ಗಣಿತವೋ ಇಲ್ಲ ವಿಜ್ಞಾನವೋ, ಈ ವಿಷಯಗಳ ಮೇಲೇ ಇರುವುದರಿಂದ ಇಂತಹ ಸಿದ್ಧ ಮಾದರಿಗಳು, ಪೂರ್ವಗ್ರಹಗಳ ಉದಾಹರಣೆಗಳ ಬಗ್ಗೆ ಚರ್ಚಿಸುವುದಾಗಲೀ, ಸವಾಲು ಹಾಕುವುದಾಗಲೀ ನಡೆಯುವುದೇ ಇಲ್ಲ.

ಎಲ್ಲೆಡೆಯೂ ಚರ್ಚೆಗೆ ಬಂದೇ ಬರುವ ವಿಷಯವೇ ಆದ ಸರ್ಕಾರೀ ಪ್ರಾಥಮಿಕ ಶಾಲೆಗಳೂ ಮೂರನೆಯದಾಗಿ ಚರ್ಚೆಗೆ ಬಂದಿತು. **1998**ರಲ್ಲೂ ಕೂಡ ಗಾಬರಿ ಹುಟ್ಟಿಸುವಷ್ಟು ಸಂಖ್ಯೆಯ ಪ್ರಾಥಮಿಕ ಶಾಲೆಗಳು, ಬಹು-ತರಗತಿಯವು. ಮತ್ತು ಇಂದಿಗೂ ಹೆಚ್ಚಿನ ಸಂಖ್ಯೆಯಲ್ಲಿ ಹೀಗೆಯೇ ಇವೆ. ಇವು ಅಧಿಕೃತವಾಗಿ ಬಹು-ತರಗತಿಯವು (ಐದು ತರಗತಿಗಳಿಗೆ ಐದಕ್ಕಿಂತ ಕಡಿಮೆ ಶಿಕ್ಷಕರಿರುವುದು), ಇಲ್ಲವೇ ಅನಧಿಕೃತವಾಗಿ ( ಶಿಕ್ಷಕರು ಒಬ್ಬರ ನಂತರ ಒಬ್ಬರು ಗೈರಾದಾಗ). ಹಾಗಿದ್ದರೂ ಸೇವಾಪೂರ್ವದ ಶಿಕ್ಷಕ ತರಬೇತಿಯಾಗಲೀ, ಸೇವಾವಧಿಯ ಶಿಕ್ಷಕ ತರಬೇತಿಯಾಗಲೀ ಒಂದು ತರಗತಿಗೆ ಒಬ್ಬರು ಶಿಕ್ಷಕರು ಇರುತ್ತಾರೆಂದೇ ಯೋಚಿಸುತ್ತದೆ. ದುರಂತವೆಂದರೆ ಮಧ್ಯಪ್ರದೇಶ ಹಾಗೂ ರಾಜಸ್ಥಾನಗಳಲ್ಲಿ 1990ರ ದಶಕದ ಮಧ್ಯದಲ್ಲಿ ಸಾವಿರಾರು ಒಂಟಿ ಶಿಕ್ಷಕ ಶಾಲೆಗಳನ್ನು ಆರಂಭ ಮಾಡಿದಮೇಲೂ (ರಾಜೀವ ಗಾಂಧೀ ಪಾಠಶಾಲೆ, ಶಿಕ್ಷಾ ಕರ್ಮಿ ಶಾಲೆ ಮತ್ತು ಇಜಿಎಸ್ ಕೇಂದ್ರಗಳು) ತರಬೇತಿಗಳಲ್ಲಿ ಇದೇ ಪರಿಸ್ಥಿತಿ ಮುಂದುವರೆಯಿತು. ತಮಗೆ ಒಂದಕ್ಕಿಂತ ಹೆಚ್ಚು ತರಗತಿಗಳನ್ನು ಒಟ್ಟಿಗೇ ನಡೆಸಲು ತಿಳಿದಿಲ್ಲ ಹಾಗೂ ನಮ್ಮ ದಾರಿಯನ್ನು ನಾವೇ ಹುಡುಕಿಕೊಳ್ಳಲು ಬಿಡಲಾಯಿತು ಎಂದೂ ಕೆಲವು ಶಿಕ್ಷಕರು ವಿವರಿಸಿದರು. ಭಾರತದಲ್ಲಿ ಈ ರೀತಿಯ

ತರಗತಿಯ ಪರಿಸರದ ಬಗ್ಗೆ ಬಹಳಷ್ಟು ಅನ್ವೇಷಣೆಯ ಕೆಲಸಗಳು ನಡೆದಿವೆ; ರಿಷಿ ವ್ಯಾಲಿ ಶಾಲೆ ಅಥವಾ ಮಾಂಟೆಸರಿ ಶಾಲೆಗಳಲ್ಲಿ ನಡೆದಿರುವ ಪ್ರಯೋಗಗಳಿರಬಹುದು, ಹಾಗಾಗಿ ಇದು ಬಹಳ ಖೇದಕರ. ಸಾಕಷ್ಟು ಕಲಿಕಾ ವಿಧಾನಗಳ ಹೊಸಹೆಜ್ಜೆಗಳಾದ ನಲಿವಿನ ಕಲಿಕೆ, ಮಗು ಕೇಂದ್ರಿತ ತರಗತಿ ಮುಂತಾದುವು ಅಗತ್ಯವಿದ್ದವರಿಗೆ ಕೇಳಿಸಲೇ ಇಲ್ಲ - ಹೆಚ್ಚಿನ ಶಿಕ್ಷಕರು ತರಗತಿಗಳಲ್ಲಿ ನಮ್ಮ ತರಬೇತುದಾರರು ಗುರುತಿಸಲು ಬಯಸದ ಸನ್ನಿವೇಶಗಳನ್ನು ನಿಯಂತ್ರಿಸುವಲ್ಲಿ ಕಷ್ಟಪಡುತ್ತಿದ್ದರು.

ಕಠಿಣ ಸನ್ನಿವೇಶಗಳ ಬಗ್ಗೆ ಮಾತನಾಡಿದಾಗ ಶಿಕ್ಷಕರ ಗುಂಪುಗಳು ನಗು ಮತ್ತು ಚಟಾಕಿಗಳಲ್ಲಿ ಮುಳುಗಿಹೋದವು. ವಾಟ್ಸಾಪ್ ಮುಂಚಿನ ದಿನಗಳ ಬಗ್ಗೆ ಬಹಳಷ್ಟು ನಗೆ ಚಟಾಕಿಗಳು ಹರಿದಾಡಿದವು, ಶಿಕ್ಷಕರನ್ನು 'ಕ್ಲಿಷ್ಟ ವಿಷಯ ಮಾದರಿಯನ್ನು ಗಂಭೀರವಾಗಿ ಚರ್ಚಿಸುವಂತೆ ಮಾಡಲು ಸಾಕಷ್ಟು ಒತ್ತಾಯಿಸಬೇಕಾಯಿತು . ತಾತ್ವಿಕವಾಗಿ ನೋಡಿದರೆ, ಶಿಕ್ಷಕ-ತರಬೇತುದಾರರು ಮತ್ತು ವಿಷಯ ತಜ್ಞರು, ಶಿಕ್ಷಕರು ತರಗತಿಯಲ್ಲಿ ಕ್ಲಿಷ್ಟ ವಿಷಯದ ದೆಸೆಯಿಂದ ಎದುರಿಸುವ ಸಮಸ್ಯೆಗಳನ್ನು ಗಮನಿಸಿ ಅದಕ್ಕೆ ಸೂಕ್ತವಾದ ಕಲಿಕಾ ಘಟಕಗಳನ್ನು ತಯಾರಿಸುತ್ತಾರೆ. ವಿದ್ಯಾರ್ಥಿಗಳ ಉತ್ತರ ಪತ್ರಿಕೆಗಳ ಕೂಲಂಕಶವಾದ ಪರಾಮರ್ಶೆಯು ತಜ್ಞರಿಗೆ ಕ್ಲಿಷ್ಟ ವಿಷಯಗಳನ್ನು ಗುರುತಿಸಲು ಸಹಾಯ ಮಾಡುತ್ತದೆ. ಮತ್ತೂ ಆಸಕ್ತಿದಾಯಕ ವಿಷಯವೆಂದರೆ, ತಮ್ಮ ವಿಷಯದ ಜ್ಞಾನವೇ ಕಡಿಮೆ ಇರುವುದರಿಂದ ನಿರ್ದಿಷ್ಟ ವಿಷಯದ (ಉದಾಹರಣೆಗೆ : ಭಿನ್ನರಾಶಿ ಇಲ್ಲವೇ ಸ್ಥಾನ ಬೆಲೆ ) ಬಗೆಗಿನ ತರಬೇತಿಯಿಂದಲೂ ತಮಗೆ ಸ್ವಲ್ಪವೇ ತಿಳಿದಿರುವ ವಿಷಯಗಳನ್ನು ಸರಿಯಾಗಿ ಪುನಃ ತಿಳಿಯಲು ಆಗುವುದಿಲ್ಲ ಎಂದು ಶಿಕ್ಷಕರೇ ಪ್ರತಿಪಾದಿಸಿದರು. ಸೇವಾ ಅವಧಿಯ ವಿಷಯ ತರಬೇತಿಯನ್ನು ಸಮಗ್ರ ದೃಷ್ಟಿಯಿಂದ ನೋಡುವುದು, ಅಂದರೆ ಮೊದಲಿಗೆ ಮೂಲ ವಿಷಯಗಳನ್ನು ಸರಿಯಾಗಿ ಕಲಿಸುವುದು ಈ ಕಾರಣದಿಂದ ಮುಖ್ಯವಾಗುತ್ತದೆ.

ಮತ್ತೊಂದು ವಿಷಯವೆಂದರೆ, ತರಬೇತಿಗೆ ಶಿಕ್ಷಕರನ್ನು ಯಾದೃಚ್ಛಿಕವಾಗಿ ಆಯ್ಕೆ ಮಾಡಲಾಗುವುದರಿಂದ, ಗಣಿತದ ಶಿಕ್ಷಕರು ಗಣಿತದಲ್ಲೇ, ಭಾಷಾ ಶಿಕ್ಷಣದ ಮಟ್ಟುಗಳನ್ನು ಕಲಿಯಬಯಸುವವರು ಭಾಷೆಯ ಗುಂಪಿನಲ್ಲೇ ಇರುತ್ತಾರೆಂದು ಹೇಳಲಾಗದು. ಕೆಲವು ಶಿಕ್ಷಕರು ಹೇಳಿದ ಇನ್ನಷ್ಟು ಅಧ್ವಾನದ ವಿಷಯವೆಂದರೆ, ಕೆಲವು 'ತರಬೇತಿ ಶಿಕ್ಷಕರೇ' ಇದ್ದಾರೆ, ಅವರು ಎಲ್ಲಾ ತರಬೇತಿ ಕಾರ್ಯಾಗಾರಗಳಿಗೂ ಹೋಗುತ್ತಾರೆ, ಮತ್ತು ಕೆಲವರು ಯಾವುದೇ ತರಬೇತಿ ಕಾರ್ಯಾಗಾರಗಳಿಗೂ ಹೋಗುವುದೇ ಇಲ್ಲ. ಯಾರು ಯಾವ ತರಬೇತಿಗಳನ್ನು ಪಡೆದಿದ್ದಾರೆ, ಮತ್ತು ಅವರ ಸಾಮರ್ಥ್ಯವನ್ನು ಹೆಚ್ಚಿಸಲು ಮತ್ತೇನು ಮಾಡಬೇಕು ಎಂಬೆಲ್ಲ ವಿಷಯಗಳ ಬಗ್ಗೆ ನಿಗಾ ಇಡುವ ವ್ಯವಸ್ಥೆಯೇ ಇಲ್ಲ. ಖೇದಕರವೆಂದರೆ, ಇಂದಿಗೂ ಈ ಪರಿಸ್ಥಿತಿ ಮುಂದುವರೆದಿದೆ. ಇತ್ತೀಚೆಗೆ ನಾವು ನಡೆಸಿದ ಒಂದು ಅಧ್ಯಯನದ ಪ್ರಕಾರ (ವಿಮಲಾ ರಾಮಚಂದ್ರನ್ ಮತ್ತಿತರರು, ಎನ್‌ಯುಇಪಿಎ 2015) ಕಾರ್ಯಾಗಾರಗಳಲ್ಲಿ ಭಾಗವಹಿಸಿದ ಸೇವಾನಿರತರ ಮಾಹಿತಿ ನಿರ್ವಹಣಾ ವ್ಯವಸ್ಥೆಯೇ ಇಲ್ಲ.

ಅಷ್ಟೇ ಗಾಬರಿ ಹುಟ್ಟಿಸುವ ವಿಷಯವೆಂದರೆ, ಬಹಳಷ್ಟು ರಾಜ್ಯಗಳಲ್ಲಿ ಶಿಕ್ಷಕರು ಪಡೆಯುವ ವಿಷಯಾಧಾರಿತ ತರಬೇತಿಯನ್ನು ಅವರ ಅಗತ್ಯದ ಆಧಾರದ ಮೇಲೆ ಹೊಂದಿಸುವುದಿಲ್ಲ. ಇದರ ಒಟ್ಟು ಪರಿಣಾಮವೆಂದರೆ, 2014 ಮತ್ತು 2015ರಲ್ಲಿ ನಾವು ಭೇಟಿ ಮಾಡಿದ ಬಹಳಷ್ಟು ಶಿಕ್ಷಕರು, ಸೇವಾವಧಿಯ ತರಬೇತಿಗಳಿಂದ ಅವರ ತರಗತಿಗಳಿಗೆ ಯಾವುದೇ ಉಪಯೋಗವೂ ಇಲ್ಲವೆಂದೂ ಹಾಗೂ ಈ ತರಬೇತಿಗಳ ಬಗ್ಗೆ ತಾವು ರೋಸಿ ಹೋಗಿದ್ದೇವೆಂದೂ ಹೇಳಿದರು.

ಈ ಅಧ್ಯಯನದಲ್ಲಿ ಪಾಲ್ಗೊಂಡಿದ್ದ 9 ರಾಜ್ಯಗಳಲ್ಲಿ ಯಾವುದೇ ರಾಜ್ಯವೂ ಸೇವಾವಧಿಯ ತರಬೇತಿಯ ಬಗ್ಗೆ ಒಂದು ಸರಿಯಾದ ನೀತಿ ನಿಯಮವನ್ನೇ ಹೊಂದಿರಲಿಲ್ಲ. ತರಬೇತಿ ಕಾರ್ಯಕ್ರಮಗಳನ್ನು ಹೆಚ್ಚಾಗಿ ಕೇಂದ್ರದ ಎರಡು ಯೋಜನೆಗಳ ( SSA ಮತ್ತು RMSA) ಧನ ಸಹಾಯದಿಂದಲೇ ನಡೆಸಲಾಗುತ್ತದೆ, ಹಾಗಾಗಿ ತರಬೇತಿಗಳು ಈ ಹಣದ ಲಭ್ಯತೆ ಮತ್ತು ಆದ್ಯತೆಗಳ ಮೇಲೆಯೇ ಆಧಾರಿತವಾಗಿರುತ್ತವೆ, ಮತ್ತು ಇವುಗಳನ್ನು ಬೇಕಾಬಿಟ್ಟಿಯಾಗಿ ನಡೆಸಲಾಗುತ್ತದೆ. ಇಂತಹ ಕಾರ್ಯಾಗಾರಗಳ ಸಂಖ್ಯೆಯಲ್ಲಿ ರಾಜ್ಯ-ರಾಜ್ಯಗಳ ನಡುವೆ ಯಾವ ತಾಳಮೇಳವೂ ಇಲ್ಲ. ಇನ್ನೂ ಮುಖ್ಯ ವಿಷಯವೆಂದರೆ, ತರಬೇತಿ ಕಾರ್ಯಕ್ರಮಗಳಲ್ಲಿ ಯಾವ ಯಾವ ವಿಷಯಗಳನ್ನು / ಸಮಸ್ಯೆಗಳನ್ನು ಎತ್ತಿಕೊಳ್ಳಲಾಯಿತು, ಎಷ್ಟು ತರಬೇತಿ ಕಾರ್ಯಕ್ರಮಗಳನ್ನು ನಡೆಸಲಾಯಿತು, ಇವುಗಳನ್ನು ದಾಖಲು ಮಾಡಲು ಯಾವುದೇ ಮಾಹಿತಿಕೋಶಗಳೂ ಇಲ್ಲ.

ಕೇಂದ್ರದ ಎರಡು ಯೋಜನೆಗಳ (SSA ಮತ್ತು RMSA) ಮೂಲಕವೇ ಬಹಳಷ್ಟು ಸಂಪನ್ಮೂಲಗಳನ್ನು ಪಡೆಯಲಾಗುತ್ತದೆ ಎಂಬುದು ಗೊತ್ತಿರುವ ವಿಷಯವೇ. ಉದಾಹರಣೆಗೆ: ಎಸ್‌ಎಸ್‌ಎ ಅಡಿಯಲ್ಲಿ ಬರುವ ರಾಜ್ಯಗಳಿಗೆ ವಿತ್ತೀಯ ವರ್ಷ 2012-13ರಲ್ಲಿ ರೂ 1273 ಕೋಟಿ ಅನುದಾನದ ಅನುಮೋದನೆ ದೊರಕಿತ್ತು, ಇದರಲ್ಲಿ ಬಳಕೆಯಾದುದು ಕೇವಲ ಅರ್ಧದಷ್ಟು ಮಾತ್ರ (ರೂ 619 ಕೋಟಿ) ಎಂಬುದು ಬೇರೆಯೇ ವಿಷಯ.[1] ಆರ್‌ಎಂಎಸ್‌ಎಯ ಅಡಿಯಲ್ಲಿ ಬಂದ ಹಣವಂತೂ ಬಹಳ ಕಡಿಮೆ, ಕೇವಲ 18 ಕೋಟಿಗಳನ್ನಷ್ಟೇ ಶಿಕ್ಷಕ ತರಬೇತಿಗೆ ಮೀಸಲಾಗಿಡಲಾಗಿತ್ತು. ಆದರೆ ಶಿಕ್ಷಕ ತರಬೇತಿಯಡಿಯಲ್ಲಿ ರಾಜ್ಯಗಳು ಬಳಸಿದ ಹೆಚ್ಚಿನ ಹಣ ಬಂದಿದ್ದು ಇದರಿಂದಲೇ.[2] ದೇಶಾದ್ಯಂತ ತರಬೇತಿ ಪಡೆದ ಪ್ರಾಥಮಿಕ ಶಿಕ್ಷಕರ ಸಂಖ್ಯೆಯಲ್ಲಿ 2005-06 ಹಾಗೂ 2012-13ರ ನಡುವೆ ಯಾವುದೇ ಹೆಚ್ಚಳವಾಗಿಲ್ಲ, ಮಧ್ಯದಲ್ಲಿ 2007-08 ಮತ್ತು 2011-12ರಲ್ಲಿ ಈ ಸಂಖ್ಯೆ ಗಣನೀಯವಾಗಿ ಹೆಚ್ಚಳವಾದರೂ ಸಹ (ಕೋಷ್ಟಕ 1). ಇದೇ ಅವಧಿಯಲ್ಲಿ ಸೇವಾನಿರತ ಶಿಕ್ಷಕರ ತರಬೇತಿಯಲ್ಲಾಗಿರುವ ಶೇಕಡಾವಾರು ಇಳಿಕೆ ಮತ್ತೂ ಭೀಕರ ಸತ್ಯವನ್ನು ಹೊರಗೆಡಹುತ್ತದೆ. ದೇಶದ

---

[1] ಆಧಾರ: ಕೇಂದ್ರ ಮಾನವ ಸಂಪನ್ಮೂಲ ಅಭಿವೃದ್ಧಿ ಸಚಿವಾಲಯದ ಅಂತರ್ಜಾಲ ತಾಣದಲ್ಲಿನ ಎಸ್‌ಎಸ್‌ಎ ಲೆಕ್ಕ ಪತ್ರಗಳು

[2] ಆಧಾರ: ಆರ್‌ಎಂಎಸ್‌ಎ ಯೋಜನೆಯ 4ನೆಯ ಜಂಟಿ ಪರಾಮರ್ಶೆ ನಿಯೋಗಕ್ಕೆ ಸಲ್ಲಿಸಿದ ಮಾಹಿತಿಯ ಆಧಾರದಲ್ಲಿ ಲೇಖಕರು ಲೆಕ್ಕ ಹಾಕಿರುವುದು.

ಒಟ್ಟು ಶಿಕ್ಷಕರಲ್ಲಿ ಕೇವಲ ಶೇ. 36.4 ಶಿಕ್ಷಕರು ಸೇವಾವಧಿಯ ಶಿಕ್ಷಕ ತರಬೇತಿಯನ್ನು 2005-06ರಲ್ಲಿ ಪಡೆದಿದ್ದರೆ, 2011-12ರಲ್ಲಿ ಅದು ಶೇ.34.2ಕ್ಕೆ ಇಳಿಯಿತು ಹಾಗೂ 2012-13ರಲ್ಲಿ ಶೇ. 25.8ಕ್ಕೆ ಇಳಿಯಿತು.

ಕೋಷ್ಟಕ 1: ಹಿಂದಿನ ವರ್ಷಗಳಲ್ಲಿ ತರಬೇತಿ ಪಡೆದ ಪ್ರಾಥಮಿಕ ಶಿಕ್ಷಕರ ಸಂಖ್ಯೆ ಮತ್ತು ಶೇಕಡಾವಾರು

| | 2005-06 | 2006-07 | 2007-08 | 2008-09 | 2009-10 | 2010-11 | 2011-12 | 2012-13 |
|---|---|---|---|---|---|---|---|---|
| ತರಬೇತಿ ಪಡೆದ ಶಿಕ್ಷಕರ ಸಂಖ್ಯೆ | 1706214 | 1688255 | 2072961 | 2010873 | 2035106 | 1892474 | 2285050 | 1893841 |
| ತರಬೇತಿ ಪಡೆದ ಶಿಕ್ಷಕರು (%) | 36.4% | 32.3% | 36.8% | 34.7% | 35.0% | 29.6% | 34.2% | 25.8% |

(ಆಧಾರ: ವಿಮಲಾ ರಾಮಚಂದ್ರನ್ ಮತ್ತಿತರರು, NUEPA, 2015)

ಲಿಂಗಾಧಾರಿತ ಸಮಸ್ಯೆಗಳೆಡೆಗೆ ಶಿಕ್ಷಕರ ಸ್ಪಂದನದ ಕೊರತೆ, ಸಾಮಾಜಿಕ ಅಸಮತೆ, ಮಕ್ಕಳ ಶಿಕ್ಷಣದ ಮೇಲೆ ಬಡತನದ ಹೊಡೆತ, ಮತ್ತು ಸ್ವಲ್ಪ ಸಬಲರಾದ ತಕ್ಷಣವೇ ತಮ್ಮ ಮಕ್ಕಳನ್ನು ಸರ್ಕಾರೀ ಶಾಲೆಯಿಂದ ಹೊರಗೆಳೆಯುವ ಆತಂಕಕಾರೀ ಬೆಳವಣಿಗೆ ಇವೆಲ್ಲ ಸತತವಾಗಿ ಸವಾಲಾಗಿಯೇ ಉಳಿದಿವೆ. ಶಿಕ್ಷಕರು ತಮ್ಮ ವಿದ್ಯಾರ್ಥಿ ದೆಸೆಯಲ್ಲಿ ಕಲಿತದ್ದನ್ನು ಕಳಚಿಕೊಂಡಂತಹ ವಿಷಯದ ಸರಿಯಾದ ಜ್ಞಾನವನ್ನು ಮತ್ತೆ ಕಲಿಯುವುದಕ್ಕೆ ಪ್ರೇರೇಪಿಸುವುದು ಅಷ್ಟೇ ದೊಡ್ಡ ಸವಾಲು. ಈ ವಿಷಯದಲ್ಲಿ ಪೋಲೆಂಡ್‌ನಂತ ದೇಶಗಳು ಹಲವಾರು ವರ್ಷಗಳ ಕಠಿಣ ಪರಿಶ್ರಮದ ನಂತರ ಯಶಸ್ಸು ಸಾಧಿಸಿವೆ.

ಸೇವಾವಧಿಯ ಶಿಕ್ಷಕ ತರಬೇತಿಯ ವೈಫಲ್ಯಕ್ಕೆ ಒಂದು ದೊಡ್ಡ ಕಾರಣವೇ, ತರಬೇತಿ ಕಾರ್ಯಕ್ರಮಗಳ ಒಟ್ಟಂದವೇ ಸರಿಯಿಲ್ಲದಿರುವುದು. ವಿಷಯವಾರು, ಉಪದೇಶಾತ್ಮಕ ಉಪನ್ಯಾಸಗಳ ಉಪಯೋಗವೇ ತರಬೇತಿಯ ಮುಖ್ಯ ರೀತಿಯಾಗಿರುವುದರಿಂದ, ದೃಷ್ಟಿಕೋನಗಳು, ರೀತಿ-ನೀತಿಗಳು ಮತ್ತು ಶಿಕ್ಷಕರು

ಎದುರಿಸುವ ತರಗತಿಯೊಳಗಿನ ಸವಾಲುಗಳು ಇವುಗಳನ್ನು ತರಬೇತಿ ಕಾರ್ಯಕ್ರಮಗಳಲ್ಲಿ ಬಗೆಹರಿಸಲು ಆಗುತ್ತಿಲ್ಲ. ಆದ್ದರಿಂದ, ಒಟ್ಟಿಗೇ ನಿಭಾಯಿಸಬೇಕಾದ ವಿವಿಧ ವಿಷಯಗಳ ಹರಹನ್ನು ತರಬೇತಿ ಎಂಬ ಪದವೊಂದೇ ಸೆರೆಹಿಡಿಯದು. ತರಬೇತಿಯೊಂದಿಗೆ ಮೊದಲಾಗುವ, ಈ ಇಡೀ ಪ್ರಕ್ರಿಯೆ ಶಿಕ್ಷಕರು ದಿನವಹಿ ಎದುರಿಸುವ ಅಡೆತಡೆಗಳ ನಿವಾರಣೆಗೆ ನಿರಂತರವಾಗಿ ಮುಂದುವರೆಯಬೇಕು. ರಾಜಸ್ಥಾನದ ಶಿಕ್ಷಾಕರ್ಮಿಯಡಿಯಲ್ಲಿ ತರಬೇತಿ ಪಡೆದ ಶಿಕ್ಷಕರು, ಅನುಭವಾತ್ಮಕ ತರಬೇತಿಯ ಶಕ್ತಿಯ ಬಗ್ಗೆ ಮತ್ತು ಅದರಿಂದ ಅವರು ಹೇಗೆ ವೈಯಕ್ತಿಕವಾಗಿ ಬೆಳೆಯುತ್ತಾ ಉತ್ತಮ ಶಿಕ್ಷಕರೂ ಆದರು ಎಂಬುದನ್ನು ಹಂಚಿಕೊಂಡರು. ಹಾಗೆಯೇ ಮಹಿಳಾ ಸಮಖ್ಯ ಬಿತ್ತುವ ಬಡವರ ಪರವಾದ ಸಂವೇದನೆಗಳಿಗೆ, ಸಮಗ್ರ ಕಲಿಕೆಯ ಮಾದರಿಗಳನ್ನು ಆಳವಡಿಸಿಕೊಂಡಿರುವುದೂ ಮುಖ್ಯ ಕಾರಣವಾಗಿದೆ.

ಅನುಭವಾತ್ಮಕ ತರಬೇತಿಗಳ ಸಮಾನ ಅಂಶಗಳ ಬಗ್ಗೆ ಮಂಥನ ನಡೆಸಿ, ಈ ಕೆಲವು ಸಾಮಾನ್ಯ ಸೂತ್ರಗಳನ್ನು[3] ಪಟ್ಟಿಮಾಡಲಾಗಿದೆ:

- ಅನುಭವಾತ್ಮಕ ಅಥವಾ ಪರಿವರ್ತನಾ ತರಬೇತಿಗಳಲ್ಲಿ ಭಾಗವಹಿಸುವವರು ಮುಕ್ತವಾಗಿ ಪಾಲ್ಗೊಳ್ಳುವ ವಾತಾವರಣ ನಿರ್ಮಾಣವಾಗಬೇಕು. ತಮ್ಮ ಕೆಲಸದ ಬಗ್ಗೆ ಮಾತನಾಡಬೇಕು, ಅನುಭವಗಳನ್ನು ಮೆಲುಕು ಹಾಕಲು ಸಾಧ್ಯವಾಗಬೇಕು, ದೂಷಣೆಯ ಅಥವಾ ಯೋಗ್ಯತೆಯನ್ನು ಅಳೆಯುವ ಆತಂಕಗಳಿಲ್ಲದೆ ಅನಿಸಿಕೆಗಳನ್ನು ಹಂಚಿಕೊಳ್ಳುವಂಥ ಆತ್ಮವಿಶ್ವಾಸ ಮೂಡಬೇಕು; ಪ್ರಾಮಾಣಿಕವಾಗಿ ಹುಡುಕುತ್ತಾ, ಪರಸ್ಪರ ಕಲಿಕೆಯ ಪರಿಸರವಾಗಬೇಕು.
- ಸಾಧಾರಣವಾಗಿ ತರಬೇತಿ ಕಾರ್ಯಕ್ರಮಗಳಲ್ಲಿ ತರಬೇತಿದಾರರು ಮಾಹಿತಿಗಳನ್ನು ಒದಗಿಸುವ ಕೆಲಸ ಮಾಡುತ್ತಾರೆ. ಆದರೆ, ಯಾವಾಗ ದೃಷ್ಟಿಕೋನಗಳ ವಿಷಯದಲ್ಲಿ ಮಾತು ಪ್ರಾರಂಭವಾಗುವುದೋ ಅಲ್ಲಿ ಕೇವಲ ಮಾಹಿತಿ ವರ್ಗಾವಣೆ ಸಾಕಾಗುವುದಿಲ್ಲ ಮಾತ್ರವಲ್ಲ; ಪರಿಸ್ಥಿತಿ ಪ್ರತಿಕೂಲಕ್ಕೂ ತಿರುಗಬಹುದು. ಅವರು ತಮ್ಮ ಬಗ್ಗೆ, ತಮ್ಮ ಶಾಲೆಯ ಬಗ್ಗೆ, ತಮ್ಮ ಕುಟುಂಬದ ಬಗ್ಗೆ, ಎಲ್ಲದರ ಬಗ್ಗೆ ಹಂಚಿಕೊಳ್ಳುವಂತೆ ಮಾಡಿ ಗುಂಪಿನಿಂದಲೇ ಮಾಹಿತಿ ಹೊರಗೆ ಬರುವಂತೆ ನಯವಾದ ಕೆಲಸ ನಡೆಯಬೇಕು. ಸುಗಮಕಾರರ (ತರಬೇತುದಾರ) ಪಾತ್ರವೆಂದರೆ, ಹೊರಬಂದ ವಿಷಯಗಳ ಪಟ್ಟಿಮಾಡಿ, ವಿಂಗಡಿಸಿ ನಿಜಸ್ಥಿತಿಗಳನ್ನು ಕಂಡುಹಿಡಿಯುವ ಕಾರ್ಯದಲ್ಲಿ ತೊಡಗಿಸಿ, ಪ್ರತಿಯೊಂದನ್ನು ಕೂಲಂಕಶವಾಗಿ, ಸೂಕ್ಷ್ಮವಾಗಿ ಮತ್ತು ಪ್ರಾಮಾಣಿಕವಾಗಿ ವಿವೇಚಿಸುವಂತೆ ಮಾಡುವುದು. ಬಹುತೇಕವಾಗಿ, ಗುಂಪಿನಿಂದ ಮಾಹಿತಿ ಕೇಳುವುದರಿಂದಲೇ ಚರ್ಚಿಸಬೇಕಾದ ಎಲ್ಲ ವಿಷಯಗಳೂ ಹೊರಬರುತ್ತವೆ.

---

[3] ಈ ಬಗ್ಗೆ ಇನ್ನೂ ಹೆಚ್ಚಿನ ಸಂವಾದವು 1998ರಲ್ಲಿ ಪ್ರಕಟವಾಗಿದೆ, ನೋಡಿ: ವಿಮಲಾ ರಾಮಚಂದ್ರನ್: ಎನ್-ಜೆಂಡರಿಂಗ್ ಡೆವಲಪ್‌ಮೆಂಟ್ : ಲೆಸನ್ಸ್ ಫ್ರಂ ದ ಸೋಷಿಯಲ್ ಸೆಕ್ಟರ್ ಪ್ರೋಗ್ರಾಮ್ಸ್ ಇನ್ ಇಂಡಿಯಾ, *Indian Journal of Gender Studies Vol 5, Number 1, pp 49 to 63*

- ಮಾಹಿತಿಯು ಗುಂಪಿನಿಂದಲೇ ಹೊರಬಂದ ನಂತರದ ಹೆಜ್ಜೆಯೆಂದರೆ, ಗುಂಪನ್ನು ಇಡಿಯಾಗಿ ಚರ್ಚೆಯಲ್ಲಿ ತೊಡಗಿಸಿ ಸಮಸ್ಯೆಯ ಬಗ್ಗೆ ವಿಚಾರ-ವಿಮರ್ಶೆಗೆ ಅವಕಾಶ ನೀಡುವುದು. ಹಾಗಾದಾಗ ನೀವು ಹೇಳುವುದು ನಮ್ಮ ಪ್ರದೇಶಕ್ಕೆ, ನಮ್ಮ ಸಮುದಾಯಕ್ಕೆ, ನಮ್ಮ ಕೆಲಸದ ಜಾಗಕ್ಕೆ ಹೊಂದುವುದಿಲ್ಲ ಎಂಬ ಸಾಮಾನ್ಯ ದೂರು ಇರುವುದಿಲ್ಲ. ಈ ಮಾತುಗಳು ಸುಗಮಕಾರರನ್ನು ಹೆಜ್ಜೆ ಹಿಂದಿಡುವಂತೆ ಮಾಡಿ, ಗುಂಪಿನಲ್ಲಿ ಅಸಡ್ಡೆ ಮತ್ತು ಅಸಹನೆ ಮೂಡಿಸುತ್ತದೆ. ಗುಂಪಿನಲ್ಲಿ ಹೊರಬಂದ ವಿಷಯಗಳನ್ನು, ಒಟ್ಟಾಗಿ ಚರ್ಚಿಸಿ ಪರಾಮರ್ಶೆ ಮಾಡುವುದರಿಂದ, ಗುಂಪು ಉತ್ಸಾಹದಿಂದ ಒಟ್ಟಾಗಿ ತೊಡಗಿಕೊಳ್ಳುತ್ತದೆ ಹಾಗೂ ಭಾಗವಹಿಸಿದ ಪ್ರತಿಯೊಬ್ಬರೂ ತಮ್ಮ ಶಾಲೆ ಮತ್ತು ಮಕ್ಕಳೊಡನೆ ಹೆಚ್ಚು ಸ್ಪಂದಿಸಲು ಅನುವಾಗುತ್ತದೆ.
- ತರಬೇತಿ ಪ್ರಕ್ರಿಯೆಯ ಕೊನೆಯ ಹಂತದಲ್ಲಿ ತರಬೇತಿದಾರರು ಸಂದರ್ಭಕ್ಕನುಸಾರವಾಗಿ ಹೆಚ್ಚಿನ ವಿಷಯಗಳನ್ನೋ, ಚಿಂತನೆಗಳನ್ನೋ, ಇತರೆ ಶಿಕ್ಷಣ ಶೈಲಿಗಳ ಬಗ್ಗೆಯೋ ಹಂಚಿಕೊಳ್ಳುತ್ತಾರೆ. ಭಾಗವಹಿಸಿದವರು, ತಾವೇ ಗುಂಪಿನಲ್ಲಿ ಕೆಲಸ ಮಾಡುತ್ತಾ ತಮ್ಮ ಶಿಕ್ಷಕ ವೃತ್ತಿಯ ಅಗತ್ಯಗಳನ್ನು ಕಂಡುಕೊಂಡಾಗ, ಇಡಿಯ ಪ್ರಕ್ರಿಯೆ ಬಹಳ  ಚೈತನ್ಯದಾಯಕವೂ ಉತ್ತೇಜನಕಾರಿಯೂ ಆಗಿ ಗೋಚರಿಸುತ್ತದೆ. ಹಾಗಾದಾಗ ಮಾಹಿತಿಗಳು, ತಾತ್ವಿಕ ವಿಷಯಗಳು ಹಾಗೂ  ಕ್ಲಿಷ್ಟ ವಿಷಯದ ಪ್ರಶ್ನೆಯೂ ಸಹಾ ಹೊಸ ಅರ್ಥಗಳನ್ನೇ ಪಡೆಯುತ್ತವೆ. ಮುಖ್ಯವಾದ ಅಂಶವೆಂದರೆ, ಭಾಗವಹಿಸುವವರಿಗೆ ತರಬೇತುದಾರರು ಏನು ತಿಳಿಸುತ್ತಾರೆಂಬುದಲ್ಲ, ಭಾಗವಹಿಸಿದವರೇ ತಮ್ಮ ತಮ್ಮಲ್ಲಿ ಏನು ಹಂಚಿಕೊಳ್ಳುತ್ತಾರೆ ಮತ್ತು ಸುಗಮಕಾರರು ಹಾಗೂ ತರಬೇತುದಾರರಿಂದ ಯಾವ ರೀತಿಯ ಬೆಂಬಲವನ್ನು ಕೇಳಿ ಪಡೆಯುತ್ತಾರೆ ಎಂಬುದು.
- ಭಾಗವಹಿಸಿದವರ ಜ್ಞಾನವನ್ನು ಕೆದಕುತ್ತಾ ಹೋಗುವ ಪ್ರಕ್ರಿಯೆ ಅವರ ಸ್ವಂತದ ಬೆಲೆಯನ್ನೂ ಹೆಚ್ಚಿಸುತ್ತಾ, ಮಾಹಿತಿ/ಅರಿಮೆ/ಚಿಂತನೆಗಳ ಕೊಡುಕೊಳ್ಳುವಿಕೆಯನ್ನು ಒಂದು ಸೃಜನಾತ್ಮಕ ಚಟುವಟಿಕೆಯಾಗಿಸುತ್ತದೆ. ಇದರಿಂದ ತರಬೇತಿ ಅಭ್ಯರ್ಥಿಗಳು ತಮ್ಮನ್ನು ತರಬೇತಿಯ ಭಾಗವಾಗಿ ಗುರುತಿಸಿಕೊಳ್ಳಲು ಸಾಧ್ಯವಾಗಿ ಈ ತರಬೇತಿಯಲ್ಲಿ ತಮ್ಮ ಕೊಡುಗೆಯೂ ಇದೆಯೆಂದು ಕಂಡುಕೊಳ್ಳುವಂತಾಗುವುದು. ಸಾರಾಂಶವೆಂದರೆ, ಸುಗಮಕಾರರು ಗುಂಪಿನ ಒಟ್ಟು ಜ್ಞಾನವನ್ನು ಉಪಯೋಗಿಸುತ್ತಾ, ಅವರಿಗೆ ತಮ್ಮ ಅಭಿಪ್ರಾಯಗಳನ್ನು ಮಂಡಿಸಲು ಅವಕಾಶಗಳನ್ನೀಯುತ್ತಾ ಹಂತಹಂತವಾಗಿ ಮುಂದಿನ ಅವಧಿಗಳಲ್ಲಿ ಕಟ್ಟುತ್ತಾ ಹೋಗಬೇಕು.

ಅನುಭವಾತ್ಮಕ ಕಲಿಕಾ ಪ್ರಕ್ರಿಯೆಯು(ಅಥವಾ ಅನುಭವಾತ್ಮಕ ತರಬೇತಿಯು) ಬುದ್ಧಿ ಮತ್ತು ಹೃದಯ ಎರಡನ್ನೂ ಬಳಸಿಕೊಳ್ಳುತ್ತದೆ. ಯಾವಾಗ ವಿಷಯವು ಹೃದಯಕ್ಕೆ ಒಪ್ಪಿತವಾಗುತ್ತದೆಯೋ, ಆಗ ಮಾಹಿತಿ, ಜ್ಞಾ ಮತ್ತು ಕಲಿಕಾತಂತ್ರಗಳು ತಕ್ಷಣದಲ್ಲಿಯೇ ಅಂತರ್ಗತವಾಗುತ್ತವೆ. ಹೃದಯವು

ಒಪ್ಪಬೇಕಾದಲ್ಲಿ ತರಬೇತಿ ಪಡೆಯುವವರಿಗೆ ಮಾಹಿತಿಯು ನಿಜವಾಗಿದ್ದರೆ ಸಾಲದು, ಕಲಿಯುವವರಿಗೆ ಅದು ನಿಜವನ್ನು ಬಿಂಬಿಸುವ ಕನ್ನಡಿಯೇ ಎಂದೆನ್ನಿಸಬೇಕು. ದೃಷ್ಟಿಕೋನ ಮತ್ತು ಕಲಿಸು-ಕಲಿ ಪ್ರಕ್ರಿಯೆಗಳಲ್ಲಿ ಬದಲಾವಣೆ ತರುವಂತಹ ತರಬೇತಿ ಕಾರ್ಯಕ್ರಮಗಳಲ್ಲಿ ಇದು ಮುಖ್ಯವಾಗುತ್ತದೆ.

ಸಾಮಾನ್ಯವಾಗಿ ವ್ಯವಹಾರ ಜ್ಞಾನದ ಮಹತ್ವವನ್ನು ಮರೆಯುತ್ತೇವೆ; ಶಿಕ್ಷಕರಾಗಿ ನಾವು ನಮ್ಮ ದೈನಂದಿನ ಅನುಭವಗಳನ್ನು ಶಿಕ್ಷಣದ ಪ್ರಕ್ರಿಯೆಗೆ ಹೊಂದಿಸಲು ಈ ಜ್ಞಾನ ಸಹಕಾರಿಯಾಗುತ್ತದೆ. ಸಮಾಜ, ಪ್ರಬಲ ಪೂರ್ವಗ್ರಹಗಳು, ಶಾಲೆ, ಪಠ್ಯಕ್ರಮ ಮತ್ತು ಶಿಕ್ಷಣ ಕ್ರಮಗಳ ಬಗ್ಗೆ ಗಂಭೀರವಾಗಿ ಚಿಂತಿಸುವ ಸಾಮರ್ಥ್ಯವನ್ನು ಶಿಕ್ಷಕರು ಹೊಂದಿದ್ದಾರೆ. ಯಾವ ತರಬೇತಿ ಕಾರ್ಯಕ್ರಮವು ವ್ಯವಹಾರ ಜ್ಞಾನವನ್ನೂ ವೃತ್ತಿಪರತೆಯನ್ನೂ ಬೆರೆಸಿ ನೋಡಬಾರದೆಂದು ಹೇಳುತ್ತದೆಯೋ, ಅದು ಅನುಭವಾತ್ಮಕ ವಾಸ್ತವಗಳನ್ನು ಭಗ್ನಗೊಳಿಸುತ್ತದೆ. ಈ ಎರಡೂ ಜಗತ್ತನ್ನೂ ಬೆಸೆಯುವುದು, ಖಚಿತವಾಗಿಯೂ ಅತ್ಯಮೂಲ್ಯ ಒಳನೋಟಗಳನ್ನು ನೀಡುತ್ತದೆ.

ಸೇವಾನಿರತ ಶಿಕ್ಷಕ ತರಬೇತಿಯ ಹೊಸ ವಿನ್ಯಾಸವು ಮೇಲಿನ ಸೂತ್ರಗಳನ್ನು ಒಳಗೊಂಡಿರಬೇಕು. ಸುಗಮಕಾರರ ತಂಡವು, ತರಬೇತಿಯಲ್ಲಿರುವವರೊಟ್ಟಿಗೇ ಉಳಿದುಕೊಂಡು ತರಬೇತಿಯ ಸಮಯದುದ್ದಕ್ಕೂ, ಶಿಕ್ಷಣ ಶಾಸ್ತ್ರವನ್ನು ತರಗತಿ ಕೊಠಡಿಗಳ ಪರಿಸ್ಥಿತಿಗಳೊಂದಿಗೆ ಸಮೀಕರಿಸಲು ಅಭ್ಯಾಸಗಳನ್ನು ನಡೆಸುತ್ತ ಶಿಕ್ಷಕರನ್ನು ತರಬೇತುಮಾಡಬೇಕು. ತರಬೇತಿಗಳಲ್ಲಿ ಎಲ್ಲ ಶಿಕ್ಷಕರನ್ನೂ ಒಳಗೊಳ್ಳುವಂತೆ ತರಬೇತುದಾರರು ಮಾಡಿದಾಗ ಆ ಶಿಕ್ಷಕರ ತರಗತಿಗಳಲ್ಲಿಯೂ ಎಲ್ಲ ಮಕ್ಕಳನ್ನು ಒಳಪಡಿಸಿಕೊಳ್ಳುವಂಥ ಗುಣಗಳು ಅವರಲ್ಲಿ ಬೆಳೆಯುವುದು ಸಾಧ್ಯವಾಗುತ್ತದೆ. ತಮ್ಮ ತರಗತಿಗಳಲ್ಲಿ ಪ್ರತೀ ಮಗುವನ್ನೂ ತಲುಪುತ್ತಿರುವುದನ್ನು ಖಾತರೀ ಮಾಡಿಕೊಳ್ಳುವುದು, ತರಬೇತುದಾರರು, ತರಬೇತಿಗಳಲ್ಲಿ ಎಲ್ಲರನ್ನೂ ಮುಟ್ಟುವ ಶ್ರಮವನ್ನು ಪ್ರಜ್ಞಾಪೂರ್ವಕವಾಗಿ ಮಾಡಿದಾಗ - ಕೊಠಡಿಯ ಪ್ರತಿಯೊಬ್ಬರೂ ಜೊತೆಗಿದ್ದಾರೆಂಬುದನ್ನು ಖಚಿತಪಡಿಸಿಕೊಳ್ಳುವುದನ್ನು ಪ್ರತ್ಯಕ್ಷವಾಗಿ ಮಾಡಿ ತೋರಿದಾಗ. ಭಾಗವಹಿಸುವಿಕೆಯ ಸಂಶೋಧನಾ ಸಾಧನಗಳನ್ನು ಸೃಜನಾತ್ಮಕವಾಗಿ ಬಳಸುತ್ತಾ, ತರಬೇತಿ ಕಾರ್ಯಕ್ರಮದ ವಿಷಯದ ಗುರಿಗಳನ್ನಷ್ಟೇ ಅಲ್ಲದೇ, ಬೋಧನಾ ವಿಧಾನದ ಗುರಿಗಳನ್ನೂ ಮುಟ್ಟಲು ಶಿಕ್ಷಕರು ಜೊತೆಗೂಡುವಂತೆ ಸ್ಫೂರ್ತಿ ನೀಡುವುದನ್ನು ಇದು ಬಯಸುತ್ತದೆ.

ಹೊಸ ಚಿಂತನೆಗಳಿಗೆ ತೆರೆದುಕೊಳ್ಳುವುದು, ಜಗತ್ತಿನ ಹೊಸ ಕಾಣ್ಕೆ ಹಾಗೂ ಆಚರಣೆಯಲ್ಲಿ ಹೊಸ ಒಳನೋಟಗಳನ್ನು ಅಳವಡಿಸಿಕೊಳ್ಳುವುದು, ಈ ಎಲ್ಲವೂ ಹಳೆಯ ಕಲಿಕೆಯನ್ನು ಪ್ರಜ್ಞಾಪೂರ್ವಕವಾಗಿ ತೊರೆಯುವ ಪ್ರಯತ್ನದೊಟ್ಟಿಗೇ ಆಗಬೇಕು. 'ಪರಿಣಿತ ' ಅಥವಾ 'ಶಿಕ್ಷಕ ತರಬೇತುದಾರ' ಅಥವಾ 'ಶೈಕ್ಷಣಿಕ ಆಡಳಿತಗಾರ' ಆದ ನಾವು ಮೊದಲಿಗೆ ವಿವೇಚನಾರಹಿತರಾಗಿ ಏನು ಮಾಡುತ್ತಿದ್ದೇವೋ ಅವನ್ನು ತೊರೆಯಬೇಕಿದೆ ಮತ್ತು ಸೇವಾ ನಿರತ ಶಿಕ್ಷಕರ ತರಬೇತಿಗೆ ವಿಭಿನ್ನ ದಾರಿಗಳನ್ನು ಮತ್ತು ಹೊಸ ವಿನ್ಯಾಸಗಳನ್ನು ನಿಜವಾಗಿ ಹುಡುಕಲು ಹೆಜ್ಜೆ ಇಡಬೇಕಿದೆ.

ವಿಮಲಾ ಅವರು ಶೈಕ್ಷಣಿಕ ಸಂಪನ್ಮೂಲ ವಿಭಾಗ, ಹೊಸ ದೆಹಲಿ, ಇವರು ಮಹಿಳಾ ಸಮಖ್ಯದ(ಮಹಿಳಾ ಸಮಾನತೆಗಾಗಿ ಶಿಕ್ಷಣ) ಕಲ್ಪನೆಯ ಹುಟ್ಟಿನೊಂದಿಗೆ ತೊಡಗಿಸಿಕೊಂಡವರು ಮತ್ತು

ಅದರ ಮೊದಲ ರಾಷ್ಟ್ರೀಯ ನಿರ್ದೇಶಕರಾಗಿ 1998-93ರಲ್ಲಿ ಭಾರತ ಸರ್ಕಾರದ ಮಾನವ ಸಂಪನ್ಮೂಲ ಸಚಿವಾಲಯದಲ್ಲಿ ಜವಾಬ್ದಾರಿ ನಿರ್ವಹಿಸಿ ದರು. ಇವರು 1998ರಲ್ಲಿ ಎಜುಕೇಶನಲ್ ರೀಸರ್ಚ್ ಯುನಿಟ್ (ಈಗ ಅದು ಇಆರ್‌ಯು ಕನ್ಸಲ್ಟೆಂಟ್ಸ್ ಪ್ರೈವೇಟ್ ಲಿಮಿಟೆಡ್ ಎಂಬ ಹೆಸರು ಪಡೆದಿದೆ) ಅನ್ನು ಸ್ಥಾಪಸಿದರು; ಇದು ಶಿಕ್ಷಣ ರಂಗದಲ್ಲಿ ಕೆಲಸ ಮಾಡುವ ಸಂಶೋಧಕರ ಹಾಗೂ ಕಾರ್ಯನಿರ್ವಾಹಕರ ಜಾಲವಾಗಿ ಕೆಲಸ ಮಾಡುತ್ತಿದೆ. ಎನ್‌ಯುಇಪಿಎನಲ್ಲಿ ಶಿಕ್ಷಕ ನಿರ್ವಹಣೆ ಮತ್ತು ಅಭಿವೃದ್ಧಿಯಲ್ಲಿ ರಾಷ್ಟ್ರೀಯ ಫೆಲೋ ಮತ್ತು ಪ್ರಾಧ್ಯಾಪಕರಾಗಿ ಕಾರ್ಯನಿರ್ವಹಿಸಿದ್ದರು. ಪ್ರಾಥಮಿಕ ಮತ್ತು ಪ್ರೌಢ ಶಿಕ್ಷಣದಲ್ಲಿ ಇವರು ಸಂಶೋಧನೆಯಲ್ಲಿ ತೊಡಗಿಸಿಕೊಂಡಿದ್ದಾರೆ. ಲಿಂಗ ಮತ್ತು ಸಮಾನತೆಯ ಸಮಸ್ಯೆಗಳು, ಶಿಕ್ಷಕರ ಸ್ಥಾನ ಮತ್ತು ಪ್ರೇರಣೆ, ಪ್ರಾಥಮಿಕ ಶಿಕ್ಷಣದ ರಾಷ್ಟ್ರೀಯ ನೀತಿ ಮತ್ತು ಯೋಜನೆಗಳಲ್ಲಿ ಸಮಾನತೆಯ ಗುರಿಗಳನ್ನು ಮುಟ್ಟಲು ಇರುವ ಅಡೆತಡೆಗಳು, ವಯಸ್ಕರ ಅಕ್ಷರಜ್ಞಾನ, ಶಿಕ್ಷಣದ ಮುಂದುವರಿಕೆ ಇವುಗಳ ಬಗ್ಗೆ ಸಂಶೋಧನೆಯನ್ನು ಮಾಡಿದ್ದಾರೆ ಮತ್ತು ಇತ್ತೀಚೆಗೆ ಶಾಲೆಯಿಂದ ಹೊರಗಳಿದ ಯುವ ಪೀಳಿಗೆಯ ಅದರಲ್ಲೂ ಹೆಣ್ಣು ಮಕ್ಕಳ ಅಗತ್ಯಗ, ಬಗ್ಗೆ ಸಂಶೋಧನೆಯಲ್ಲಿ ನಿರತರಾಗಿದ್ದಾರೆ. vimalar.ramachandran@gmail.com ಮೂಲಕ ಅವರನ್ನು ಸಂಪರ್ಕಿಸಬಹುದು.